

# ಕಾನನ

NOVEMBER

ನಿಸರ್ಗದೆಡೆಗೆ ಪಯಣ

## ಲೇಖನಗಳು

* ನಿರುತ್ತರಕ್ಕೆ

  – ಶಂಕರಪ್ಪ.ಕೆ.ಪಿ

* ಗಂಗಾ-ಸಾಗರ

  – ಶಂತನ್.ಕೆ.ಬಿ

* ಹಕ್ಕಿಲೋಕ

  – ನಾಗೇಶ್.ಓ.ಎಸ್

* ಪರಿಸರ ದಿನ

  – ಕೃಷ್ಣನಾಯಕ್

ಅನಿಸಿಕೆ

E-mail: kaanana.mag@gmail.com

ಮುಖಪುಟ: ಗೋವಕ್ಕಿ

# ಸಂಪಾದಕೀಯ



ಎಲ್ಲೋ ಕಾಡುಹಳ್ಳಿಯ ಮೂಲೆಯಲ್ಲಿ ಆಡುಕುರಿ ಮೇಯಿಸುತ್ತಾ ಕಾಡುತಿರುಗುತ್ತಿದ್ದ ಕಾಲದಲ್ಲಿ ಅನಿರಿಕ್ಷಿತವಾಗಿ ನಮ್ಮ ಕೈಗೆ ಸಿಕ್ಕ ಕೆ. ಪಿ. ಪೂರ್ಣಚಂದ್ರ ತೇಜಸ್ವಿಯವರ ಲೇಖನಗಳು, ಕಾಡಿನ ಬಗ್ಗೆ ನಮಗಿದ್ದ ತಾತ್ಸರ ದೋರಣೆಯನ್ನೇ ಪರಿಸರ ಪ್ರೀತಿಯಾಗಿಸಿ, ಜೀವಿ ಮತ್ತು ಭೂಮಿಯ ಬಗ್ಗೆ ನಮಗೆ ಹೊಸ ದೃಷ್ಠಿಯನ್ನು ನೀಡಿ ಬೆಳಕಾಗಿಸಿದೆ.

ಕಳೆದವಾರ ನಮ್ಮ ತಂಡ ತೇಜಸ್ವಿಯವರ ತೋಟ *ನಿರುತ್ತರಕ್ಕೆ* ಭೇಟಿಕೊಟ್ಟ ಅಪೂರ್ವ ಕ್ಷಣಗಳನ್ನು ಈ ಸಂಚಿಕೆಯಲ್ಲಿ ನಿಮ್ಮೊಂದಿಗೆ ಹಂಚಿಕೊಳ್ಳುತ್ತಿದ್ದೆವೆ.

ಶಂತನ್ ರವರ ಉಡುಪಿ ಬಳಿಯ ಪ್ರೇಕ್ಷಣಿಯ ಸ್ಥಳ ಕೆಮ್ಮಣ್ಣುವಿನ ನದಿ ಮತ್ತು ಸಮುದ್ರದ ಸಮಾಗಮವಾಗುವ ಪರಿಸರ ಸೌಂದರ್ಯವನ್ನು *ಗಂಗಾ ಸಾಗರ* ದಲ್ಲಿ ಚಿತ್ರಿಸಿದ್ದಾರೆ. ಹಾಗು ಈ ಬಾರಿಯ ಹಕ್ಕಿಲೋಕದಲ್ಲಿ ಹಳ್ಳಿ ಹೈಕಳ ಬಾಲಕ್ರೀಡೆಗೆ ಬಲಿಯಾದ ಗೋವಕ್ಕಿಯನ್ನು *ನಾವು ಕೊಂದ ಹಕ್ಕಿ* ಯಲ್ಲಿ ಮಕ್ಕಳ ತುಂಟಾಟ ಮತ್ತು ಅವು ಪ್ರಕೃತಿ ಒಡ್ಡುವ ಸವಾಲನ್ನು ಒಂದೊಂದನ್ನು ಸ್ವೀಕರಿಸಿ ಕಲಿಯುವ ಬಗ್ಗೆ ವಿವರವಾಗಿ ತಿಳಿಸಿಕೊಟ್ಟಿದ್ದಾರೆ.

ಕೇವಲ ಹೆಸರಿಗಸ್ಟೇ ಪರಿಸರ ದಿನವನ್ನಾಚರಿಸಿ, ಇರುವ ಅಲ್ಪ ಸ್ವಲ್ಪ ಕಾಡಿನಲ್ಲೇ ಗಣಿಗಾರಿಕೆ, ಕಳ್ಳಬೇಟೆ, ಬೇಸಾಯಕ್ಕೆ ಭೂಮಿ, ವಿದ್ಯುತ್‌ಗಾಗಿ ಡ್ಯಾಮು, ಗಾಳಿಗಿರಗಿಟ್ಲೇ ಜನರೇಟರ್ ಹಾಕಲು ಎಂದು ಕಾಡೆಲ್ಲಾ ಕಡಿದು ರೋಡು ಮಾಡಿ, ಮರಗಳನ್ನೆಲ್ಲಾ ಬೋಳಿಸುತ್ತಿದ್ದರೂ ಕೂಡ, “ ಆಡಿನ ಮಾಂಸ ತಿನ್ನುವವರಿಗಿಂತ ಕೋಳಿ ತಿನ್ನುವವರು ಹೆಚ್ಚು ಅರಣ್ಯವನ್ನು ಉಳಿಸುತ್ತಾರೆ” ಎಂದು ಅವೈಜ್ಞಾನಿಕ SMS ಕಳಿಸಿಕೊಂಡು ಜೋಕುಮಾಡಿ ನಕ್ಕು ಕುಣಿದು, ವನ್ಯಜೀವಿಗಳನ್ನು ಉಡುಕುತ್ತಿದ್ದಾರೆ ಎಂದು ನಾಯಕ್ ರವರು *ಪರಿಸರ ದಿನ* ದಲ್ಲಿ ದ್ವನಿಯಾಗಿಸದ್ದಾರೆ.



## ಕಾನನಕ್ಕೆ ನೀವು ಬರೆಯಿರಿ

ವನ್ಯಜೀವಿ ಹಾಗೂ ಪರಿಸರ ಸಂರಕ್ಷಣೆ, ವಿಜ್ಞಾನದ ಬಗ್ಗೆ ಲೇಖನಗಳನ್ನು ತಾವೂ ಕಾನನಕ್ಕೆ ಬರೆಯಬಹುದು.

ಇ–ಮೇಲ್ ವಿಳಾಸ: kaanana.mag@gmail.com

**Wildlife Conservation Group**



# ನಿರುತ್ತರಕ್ಕೆ.

ದಾರಿಯುದ್ದಕ್ಕೂ ಅಲ್ಲಲ್ಲಿ ಬೆಳೆದ ಬೃಹದಾಕಾರದ ಮರಗಳು, ಅದರ ನೆರಳಲ್ಲಿ ರೆಂಬೆ ರೆಂಬೆಗೂ ಕೆಂಪನೆಯ ಕಾಫಿಹಣ್ಣು ತುಂಬಿ, ಅದರ ಬಾರಕ್ಕೆ ಬಳುಕಿರುವ ಕಾಫಿಗಿಡಗಳ ನಡುವಲ್ಲಿ ಆಗಾಗ ಅಲ್ಲಲ್ಲಿ ಸಣ್ಣಪುಟ್ಟ ಪಕ್ಷಿಗಳ ರೆಕ್ಕೆಬಡಿತದ ಸದ್ದು ಕೇಳಿಸಿ ಮಾಯವಾಗುತ್ತಿದ್ದಂತೆ ಕಚಿಪಿಚಿ ಕೆಸರು ದಾರಿಯಲ್ಲಿ ನಡೆವಾಗ ಜಿಗಣೆಗಳು ಮೆಲ್ಲಗೆ, ತಣ್ಣಗೆ ಕಚ್ಚ ತೊಡಗಿದ್ದವು. ಅಂದು ಬಹುದಿನದ ನಮ್ಮ ಕನಸೊಂದು ಬಹಳ ಕಾಲ ಕಳೆದ ಮೇಲೆ ನನಸಾಗಿತ್ತು. ಅದುವೇ 'ನಿರುತ್ತರ'ಕ್ಕೆ ನಮ್ಮ ತಂಡದ ಭೇಟಿ.

ಮೂಡುಗೆರೆಯ ಕಾಡಿನಂತಹ ಕಾಫಿತೋಟದಲ್ಲಿ ಕುಳಿತು ತಮ್ಮ ಬರವಣಿಗೆಯಿಂದ ಹಾಗೂ ಬದುಕಿದ ರೀತಿಯಿಂದಲೇ ನಾಡಿನ ಹಲವು ಯುವ ಜನರಿಗೆ ಆಕರ್ಷಿತಗೊಂಡಿರುವ ಕೆ.ಪಿ.ಪೂರ್ಣಚಂದ್ರತೇಜಸ್ವಿಯವರ ತೋಟಕ್ಕೆ ಭೇಟಿಕೊಟ್ಟೆವು. ಕೆಲಕಾಲ ಮೌನವಾದೆವು. ಪ್ರಕೃತಿಯೊಂದಿಗೆ ಬದುಕುವ ಹಾಗೂ ಇತರ ಜೀವಿಗಳಿಗೂ ಬದುಕಬಿಡುವ ಪರಿಸರದ ವಿಶ್ವರೂಪದಂತಿದ್ದ ಆ ಉದ್ಯಾನವನ್ನು ನೋಡಿ ಧನ್ಯತೆಯಿಂದ ಸವಿದೆವು.

ರಾಜೇಶ್ವರಿ ಮೇಡಂರವರು ನಮ್ಮನ್ನೆಲ್ಲ ಪ್ರೀತಿಯಿಂದ ಬರಮಾಡಿಕೊಂಡು, ಎಲ್ಲರನ್ನೂ ಪರಿಚಯಿಸಿಕೊಂಡು, ಸುಮಾರು ಒಂದು ಗಂಟೆಗಳ ಕಾಲ ತೇಜಸ್ವಿಯವರ ಅರ್ಥಕ್ಕೆ ನಿಂತಿರುವ ಕೆಲವು ಕಾರ್ಯಗಳ ಬಗ್ಗೆ, ತೋಟದ ಕೆರೆಯಲ್ಲಿ ಸದಾ ಧ್ಯಾನಿಸುತ್ತಾ ಕೂರುವ ನೀರುಕಾಗೆಯಿಂದ ಹಿಡಿದು, ಪರಿಸರ ಸಂರಕ್ಷಣೆಯಲ್ಲಿ ಯುವಕರ ಪಾತ್ರದವರೆಗೂ ನಮ್ಮೊಂದಿಗೆ ಆತ್ಮೀಯವಾಗಿ ಮಾತನಾಡಿದರು.





ಬಾಗಿಲಲ್ಲೇ ಬೆಳೆಸಿದ ಬೃಹತ್ ಟ್ರೀ ಪರ್ನ್, ಹಲವು ಜಾತಿಯ ಆರ್ಕಿಡ್‌ಗಳು, ಮನೆಗೊಂದು ಕೆರೆಯಂತೆ ಮನೆಮುಂದೆ ಕೆರೆ, ಆ ಕೆರೆಯ ಸುತ್ತಮುತ್ತಲೇ ತೆಗೆದ ಹಲವು ಹಕ್ಕಿ–ಪಕ್ಷಿಗಳ ಫೋಟೋಗಳನ್ನು ನೋಡಿ ಕಣ್ತುಂಬಿಕೊಂಡೆವು.



ನಮ್ಮ ಕೆಲವು ಪಕ್ಷಿಛಾಯಾಚಿತ್ರಗಳನ್ನು ಗಮನಿಸಿದ ರಾಜೇಶ್ವರಿಯವರು ‘ಕೇವಲ ಪಕ್ಷಿಗಳ ಫೋಟೋ ತೆಗೆದರೆ ಸಾಲದು. ಅದರಲ್ಲಿ ಆ ಪಕ್ಷಿಯ ವ್ಯಕ್ತಿತ್ವ ಹಾಗೂ ಹಾವ ಭಾವಗಳನ್ನು, ಅದರ ಜೀವನ ಶೈಲಿಯನ್ನು ಅಭ್ಯಾಸಿಸಿ ಆ ಕ್ಷಣಗಳನ್ನ ಸೆರೆಯಿಡಿಯುವುದು ಬಹಳ ಕಷ್ಟದ ಕೆಲಸ’ವೆಂದು ಅದನ್ನು ಗಮನಿಸಬೇಕು ಎಂದು ಸಲಹೆಯನ್ನು ಕೊಟ್ಟರು.





ನಮ್ಮ ಕುತೂಹಲವನ್ನು ಗಮನಿಸಿ ತೇಜಸ್ವಿ ಯವರು ಬೆಂಗಳೂರಿನಲ್ಲಿ ಪ್ರದರ್ಶಿಸಿದ್ದ ದೊಡ್ಡ ದೊಡ್ಡ ಗಾತ್ರದ ಹಲವು ವನ್ಯಜೀವಿ ಫೋಟೋಗಳನ್ನು ತೋರಿಸಿದರು. ತೇಜಸ್ವಿಯವರು ಬಹಳ ಹಿಂದೆಯೇ ಸಣ್ಣ ಕ್ಯಾಮರ ಬಳಸಿ ತೆಗದ *ನಿರುತ್ತರ*ದ ವೈಡ್ ಅಂಗಲ್ ಫೋಟೋ ಒಂದನ್ನು ತೋರಿಸಿ ಇದೇ ರೀತಿ ಹಿಮಾಲಯದ ಬೆಟ್ಟಗಳನ್ನು ಚಿತ್ರಿಸಬೇಕೆಂಬ ತೇಜಸ್ವಿಯವರ ಕನಸು ನನಸಾಗಲಿಲ್ಲ ಎಂಬುದನ್ನು ನೆನೆದರು. ಯುವಜನತೆಗೆ ಪರಿಸರದ ಬಗ್ಗೆ ಪ್ರೀತಿ ಮೂಡಿಸುವಂತಹ ಪರಿಸರ ಶಿಕ್ಷಣ, ವಿಜ್ಞಾನ ಮತ್ತು ತಂತ್ರಜ್ಞಾನಗಳ ಬಗ್ಗೆ ಕನ್ನಡದಲ್ಲಿ ಇನ್ನೂ ಬಹಳ ಉತ್ತಮವಾದ ಕಾರ್ಯಗಳು ನಡೆಯಬೇಕಿದೆ ಎಂದರು.



ತೇಜಸ್ವಿಯವರ ‘ಮಾಯೆಯಮುಖ’ ಗಳಲ್ಲಿನ ಹಲವು ಫೋಟೋಗಳ ಕಲಾತ್ಮಕತೆ ಮತ್ತು ಪರಿಸರ ಛಾಯಾಚಿತ್ರದ ವೈಭವ ಹಾಗೂ ಅವುಗಳ ವಿಭಿನ್ನತೆಯು ನನಗೆ ತುಂಬಾ ಸಂತೋಷ ಕೊಟ್ಟವು. ಅದರಲ್ಲೂ ಎರಡು ಕಾಡುಇಲಿಗಳು ದಾರಿಯಲ್ಲಿ ಕುಳಿತು ಸಂಭಾಷಿಸುತ್ತಿರುವ ಛಾಯಚಿತ್ರವನ್ನಂತೂ ನೆಲಮಟ್ಟದಲ್ಲಿ ಸೆರೆಯಿಡಿದಿದ್ದರು.

ಆ ಒಂದು ಚಿತ್ರದಲ್ಲಿ “ಅತೀ ಸಂಕೋಚ ಸ್ವಭಾವದ ಇಲಿಯಂತ ಜೀವಿಗಳನ್ನಲ್ಲದೇ ಇತರೆ ವನ್ಯಜೀವಿಗಳ ಜೀವನದ ಬಗ್ಗೆ ತೇಜಸ್ವಿಯವರಿಗಿದ್ದ ಅನುಭವ ಎದ್ದು ಕಾಣುತ್ತಿತ್ತು. ಇದನ್ನು ಕಂಡ ನಮಗೆ “ಭೂಮಿಯ ಮೇಲಿರುವ ಸಕಲ ಜೀವಿಗಳನ್ನ ಅಭ್ಯಸಿಸಿ, ಅವುಗಳ ಬದುಕಿಗೆ, ಆವಾಸಕ್ಕೆ ತೊಂದರೆಯಾಗದಂತೆ, ಆ ಅಪೂರ್ವ ಜೀವಿಗಳನ್ನ ಗಮನಿಸಿ, ಮನದಲ್ಲೇ ದಾಖಲಿಸಿ, ಆ ಸಂತೋಷವನ್ನು ಇತರರಿಗೂ ಅಂಚಿಕೊಳ್ಳುವ ಸಾಧನವೇ *ವೈಲ್ಡ್ ಲೈಫ್ ಫೋಟೊಗ್ರಫಿ*” ಎಂದೆನಿಸಿತು. ಪ್ರಶಸ್ತಿಗೋಸ್ಕರ, ಪುರಸ್ಕಾರಕ್ಕೋಸ್ಕರ, ಪ್ರಚಾರಕ್ಕೋಸ್ಕರ ವನ್ಯಜೀವಿಗಳನ್ನ ಚಿತ್ರಿಸದೆ, ಈ ಅಪೂರ್ವ ಹವ್ಯಾಸವನ್ನು ಮಾನವರನ್ನ ಪರಿಸರದ ಹತ್ತಿರಕ್ಕೆ ಕರೆದೊಯ್ಯುವ ಸಾಧನವಾಗಿ ಬಳಸಬೇಕು ಎಂದು ಕೊಂಡೆವು.

ತೇಜಸ್ವಿಯವರು ಬಳಸುತ್ತಿದ್ದ ಹಳೇ ಕಂಪ್ಯೂಟರ್, ಮೀನಿನ ಗಾಳ ಮತ್ತು ಅವರು ಬಳಸುತ್ತಿದ್ದ ಫೋಟೋ ಎನ್ಲಾರ್ಜರ್ ಹಾಗೂ ಪುಸ್ತಕ ಭಂಡಾರದಲ್ಲಿದ್ದ ‘ಸೆಲ್ಫಿಷ್ ಜೀನ್’, ‘ಶೋಡಿಂರ್ಗರ್ ಕ್ಯಾಟ್’ ನಂತಹ ವಿಜ್ಞಾನ ಪುಸ್ತಕಗಳ ಜೊತೆಗೆ ಟಾಲ್ಸ್ಟಾಯ್, ಕಾರಂತ, ಮೊದಲಾದ ಲೇಖಕರ ಪುಸ್ತಕಗಳನ್ನು ಕಂಡೆವು. ಇವುಗಳ ಜೊತೆಗೆ **‘Motor cycle repair guide’** ಕೂಡ ಇತ್ತು!.



ಕೆರೆ, ಕಾಫಿತೋಟ ಸುತ್ತುವಷ್ಟರಲ್ಲಿ ಕತ್ತಲಾದ್ದರಿಂದ ಗೆಳೆಯ ಅಶ್ವಥ್‌ಗೆ ತೇಜಸ್ವಿಯವರ ಸ್ಕೂಟರನ್ನು ಕೊನೆಗೂ ನೋಡಲಾಗಲಿಲ್ಲವಲ್ಲಾ ಎಂಬ ವ್ಯಥೆಯಾದರೆ, ಪಾಕಕ್ರಾಂತಿಯಲ್ಲಿ ಬರುವ ಕುಕ್ಕರ್ ಕಾಣಲಿಲ್ಲ ಎಂಬ ಗುಲ್ಲು ಶ್ರೀ ಮುರಳೀರವರಿಗೆ. ತೇಜಸ್ವಿ ಮನೆಯ ಬಳಿಯೇ ಇದ್ದ ಅಪರೂಪದ ಡೌ-ಆರ್ಕಿಡ್ ಗಿಡದ ಪಕ್ಕದಲ್ಲೇ ಇದ್ದ ಎರಡು ಟ್ರೀ-ಫ್ರಾಗ್ ಗಳನ್ನು ಫೋಟೊ ತೆಗದ ಖುಷಿ ಮಿತ್ರ ರಾಜ್‌ಗೆ.

ಅವರು ಬದುಕಿದ ಜೀವನವೇ ಅವರ ಬರಹ! ಮತ್ತು ಬರಹವೇ ಮೊದಲಾದ ಹವ್ಯಾಸಗಳೇ ಜೀವನ ಎಂಬಂತೆ ಬದುಕಿದ ತೇಜಸ್ವಿಯವರು ಬಿಡಿಸಿರುವ ಲಂಬಾಣಿಯ ಮಹಿಳೆಯ ವರ್ಣಚಿತ್ರವನ್ನು ನೋಡಿ ಮಾಯಾಲೋಕದ ಬಾಯಮ್ಮ ಜ್ಞಾಪಕಕ್ಕೆ ಬಂದಳು.



“ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ. . . ಆ ಕ್ಷಣದಲ್ಲೇ ಹಾರಿ ಹೋದಂತೆ” ಎಂಬಂತೆ ಅನಿರೀಕ್ಷಿತವಾಗಿ ಇಲ್ಲವಾದ ತೇಜಸ್ವಿಯವರು, ಅಲ್ಲೇ ಎಲ್ಲೋ ಹೊರಗೆ ಹೋಗಿದ್ದಾರೆ ಇನ್ನೇನೂ ಬಂದು ಬಿಡುವರು ಎನಿಸುವಂತಿತ್ತು ಆ ಕ್ಷಣಗಳು. “ಎಷ್ಟು ಸಾಧ್ಯವೋ ಅಷ್ಟು ಆ ವನ್ಯ ಚೈತನ್ಯವನ್ನು ಆಗ್ರಹಿಸಿ ಎದೆಯಲ್ಲಿ ತುಂಬಿಕೊಂಡು ಬಂದಿದ್ದೇವೆ ಇನ್ನೇನಿದ್ದರು ಆ ಚೈತನ್ಯದ ಕೆಲಸವೇ......... ಮುನ್ನಡೆಯಲಿ ನಮ್ಮನ್ನು ‘ನಮ್ಮ ಜನರೆಡೆಗೆ’.

ಆ ತೇಜೋ ಪೂರ್ಣ ವನ್ಯ ಬದುಕಿನೆಡೆಗೆ. .

ನನ್ನ ಭೂಮಿಯೆಡೆಗೆ. . . .

ನಿಸರ್ಗದೆಡೆಗೆ. . .

ಕಾನನದೆಡೆಗೆ. . .

ಕೊನೆಗೆ.....

ಬೆಳಕಿನೆಡೆಗೆ.



# ಗಂಗಾ–ಸಾಗರ

ವೊನ್ನೆ ನಾನು ನನ್ನ ಸ್ನೇಹಿತ ರಾಜ್‌ಪವನ್‌ನೊಂದಿಗೆ ಕೆಮ್ಮಣ್ಣಿಗೆ ಹೋಗಿದ್ದೆ(ಉಡುಪಿಯ ಹತ್ತಿರ ಒಂದು ಪ್ರೇಕ್ಷಣೀಯ ಸ್ಥಳ), ಸಮುದ್ರ ತೀರದಿಂದ ಎರಡು–ಮೂರು ಕಿಲೋಮೀಟರ್‌ನ ದೂರ, ಮೈ ಚೆಲ್ಲಿ ಮಲಗಿದ ಜಲರಾಶಿ,ಸುತ್ತಲೂ ಹಸಿರ ಹಾಸು, ತೆಂಗಿನ ತೋಟ, ಕೇಳುಗರನ್ನು ಮಂತ್ರ ಮುಗ್ಧಗೊಳಿಸುವ ಹತ್ತಾರು ಬಗೆಯ ಹಕ್ಕಿಗಳ ಕಲರವ, ಮರಳಿನ ಮೇಲೇ ಬದುಕುಕಟ್ಟಿಕೊಂಡ ಜೀವಿಗಳು, ಬೆಸ್ತರು, ಇವರ ಬದುಕನ್ನು ತೇಲಿಸುವ ದೋಣಿಗಳು, ಮೌನವೂ ನಿದ್ದೆಹೋದ ಅನುಭವ ತರಿಸುವಷ್ಟು ಮೌನ, ಶಂಕ್ರಣ್ಣನ "ಗೀತ" ಚಿತ್ರದ ಹಾಡನ್ನು ನೆನಪಿಸುವ ತೂಗು ಸೇತುವೆ. ಇವೆಲ್ಲ ಆ ಸ್ಥಳವನ್ನ ಎಷ್ಟು ನೋಡಿದರೂ ಮತ್ತೆ ಮತ್ತೆ ಹೋಗುವಂತೆ ಮಾಡುತ್ತವೆ. ಉಡುಪಿಗೆ ಬಂದರೆ ಒಮ್ಮೆ ಇಲ್ಲಿಗೆ ಹೋಗಿಬನ್ನಿ ನಿಮಗೆ ಈ ಸ್ಥಳ ವಿಶೇಷ ಅನುಭವ ಕೊಡುವುದರಲ್ಲಿ ಎರಡು ಮಾತಿಲ್ಲ.

ನಾವು ಅಲ್ಲಿ ಪಕ್ಷಿಗಳ ವೀಕ್ಷಣೆ ಮತ್ತು ಅವುಗಳನ್ನ ನಮ್ಮ ಕ್ಯಾಮೆರಾ  ಕಣ್ಣಿನಲ್ಲಿ ಸೆರೆಹಿಡಿಯಲು ಹೋಗಿದ್ದೆವು. ಆ ಜಲ ರಾಶಿ, ನೀರಿನಲ್ಲಿ ಸಾಗುತ್ತಿದ್ದ ದೋಣಿಗಳು ನಮ್ಮನ್ನು ಬಹಳವಾಗಿ ಆಕರ್ಶಿಸಿದವು. ದೋಣಿ ವಿಹಾರಕ್ಕೆ ಅವಕಾಶ ಆದಲ್ಲಿ ಒಳ್ಳೆಯದಾಗುತ್ತೆ ಎಂದು ಎಣಿಸಿ.ಅಲ್ಲಿಯೇ ಹತ್ತಿರದಲ್ಲಿದ್ದರನ್ನ ವಿಚಾರಿಸಿದೆವು, ೬೦ ರೂಪಾಯಿಗಳಿಗೆ ನಾವು ಒಪ್ಪಂದ ಮಾಡಿಕೊಂಡು ವಿಹಾರ ಹೊರಟೆವು. "ನಿಮಗೆ ನೀರಿನ ಸಮಸ್ಯೆಯೇ ಇದ್ದಹಾಗೆ ಕಾಣೋದಿಲ್ಲ, ಅಲ್ವ. . .?" ಆ ಜಲಧಿಯನ್ನು ಕಂಡು ಅಂಬಿಗನನ್ನು ಪ್ರಶ್ನಿಸಿದೆ. "ಇಲ್ಲ, ಭಾರಿ ಸಮಸ್ಯೆ ಉಂಟು, ಬಾವಿ ತೋಡಿದ್ರೂ ಇಲ್ಲಿ ಬರೋದು ಉಪ್ಪು ನೀರೆ. . . ". "ಅಲ್ಲ, ಇಷ್ಟೋಂದು ನೀರಿದೆ ನದೀಲಿ!?". "ಇದು ಉಪ್ಪು ನೀರೆ, ಸಮುದ್ರದ್ದು, ಸೀ ನೀರಲ್ಲ. . . !". ನಾನು ಆ ನೀರಲ್ಲಿ ಒಮ್ಮೆ ಕಯ್ಯಾಡಿಸಿದೆ, ಒಣಗಿದ ಕಯ್ಗುಳಿಗೆ ಹಿತಕರವಾದ ಅನುಭವವಾಗಲಿಲ್ಲ. ಅರೆ, ಇದು ನದಿ ನೀರಲ್ಲ!. ಸಮುದ್ರ ಇರೋದು ಬಹಳ ದೂರ, ಆದ್ರೆ ಇಲ್ಲೀವರೆಗೂ ಅದರ ನೀರು ಬಂದಿದೆ!. ದೋಣಿ ಸಮುದ್ರದ ನೀರಿನ ಮೇಲೆ ತೇಲುತ್ತಿತ್ತು. ಭೂ ಪ್ರದೇಶದ  ಮೂರ್ನಾಲ್ಕು ಕಿಲೋಮೀಟರ್ ಒಳಗೆ ನುಗ್ಗಿ ಬಂದಿದೆ, ಆಶ್ಚರ್ಯವೆ! ಯಾರಾದರೋ ಅವನನ್ನು ಪ್ರಚೋದಿಸದ ಹೊರತು ಸುಮ್ಸುಮ್ನೆ ಹೀಗೆ ನುಗ್ಗಿ ಬರುವವನಲ್ಲ, ಸುನಾಮಿಯೇ ಆಗಲಿ ಅಥವಾ ಹುಣ್ಣಿಮೆಯೇ ಆಗಲಿ ಅವನನ್ನು ಕೆರಳಿಸುವವರಿರಲೇಬೇಕು. ಆದರೆ ಇಲ್ಲಿ ಅವರ್ಯಾರೂ ಇಲ್ಲ. ಆದರೂ . . . ?! ಇದೇ ಪ್ರಶ್ನೆ ಹೊತ್ತು ನಾವು
ಮನೆಗೆ ಹೊರಟೆವು.



ನಾನು ಸಮುದ್ರ ಎಷ್ಟೇ ದೊಡ್ಡದಾದರೂ ತನ್ನ ಎಲ್ಲೆ ಮೀರೋದಿಲ್ಲ ಅಂತ ಕೇಳಿದ್ದೆ. ನದಿಯು ಸಮುದ್ರದತನಕ ಹೋಗಿ ಸೇರುತ್ತೆ ಅಂತ ಭಾವಿಸಿದ್ದೆ. ಆದ್ರೆ ಇಲ್ಲಿ. . . . ಇದೇ ಗುಂಗಿನಲ್ಲಿದ್ದವನಿಗೆ ನನ್ನ ಕಲ್ಪನೆಗಳು ನಾನಾ ದಿಕ್ಕಿನಿಂದ ಉತ್ತರ ಹುಡುಕಿ ತಂದವು. ಕೊನೆಯಲ್ಲಿ ನಾನು ನನ್ನದೇ ಆದ ಉತ್ತರವನ್ನು ಕಂಡುಕೊಂಡೆ, ಆ ಕಲ್ಪನೆಗಳು ಹೆಕ್ಕಿ ತಂದ ಉತ್ತರಗಳನ್ನ ಪದಗಳಲ್ಲಿ ಪೋಣಿಸಿ ನಿಮ್ಮ ಮುಂದಿಟ್ಟಿದ್ದೇನೆ. . . . .

*ಗಿರಿ–ಗೌಹರೆಗಳಲಿ,*
*ದಟ್ಟ ಕಾನನಗಳಲ್ಲಿ ಹುಟ್ಟಿದ ಗಂಗೆಗೆ*
*ಅವಳ ಗಂಡನ ಹೆಸರು ಹೇಳಿದವರಾರು?!*
*ಅವನ ಸೇರಲು ಇದೇ ದಾರಿ ಎಂದು*
*ತೋರಿದವರಾರು?!*

*ಅಂದಿನಿಂದ ಒಂದೇ ಉಸಿರಲಿ ಹೊರಟವಳು*
*ಕಲ್ಲು –ಮುಳ್ಳುಗಳ ಲೆಕ್ಕಿಸದೆ,*
*ಬಂಡೆ–ದಿಣ್ಣೆಗಳ ಕೊರೆದು,*
*ಕಣಿವೆಗಳಿಂದಿಳಿದು,*
*ಕುಣಿದು–ಕುಪ್ಪಳಿಸಿ ಬಂದವಳು*
*ಸಾಗರನ ಕಂಡು ಉಕ್ಕಿದ ಭಾವಕ್ಕೆ*
*ನಿಜವಧುವಿನಂತೆ ಮೌನವಾದಳು.*

*ನೋಡುಗರ ಕಣ್ಮನ ಸೂರೆಗೊಳ್ಳುವ ಚೆಲುವು,*
*ಕಲ್ಲೆದೆಯನ್ನೂ ಕರಗಿಸುವ ಶಕ್ತಿ,*
*ಸಕಲ ಸಂಪತ್ತುಗಳಿದ್ದರೂ,*
*ಘನ ಗಾಂಭೀರ್ಯದಿಂದ ಸಂಯಮಿಯಂತೆ ತೋರುವ ಸಾಗರನು*
*ಪ್ರೀತಿಗಾಗಿ ಹಂಬಲಿಸುವವನಂತೆ,*
*ತನ್ನ ಸೇರಲು ಓಡಿಬರುವ ಗಂಗೆಯ*
*ಬರಮಾಡಿಕೊಳ್ಳಲೇನೋ ಎಂಬಂತೆ*
*ಸಾಗರನೂ ತನ್ನ ಎಲ್ಲೆಮೀರಿ*
*ಮೈಲುಗಳ ದೂರ ಸಾಗಿ ಬಂದಿರುವನು*
*ಸಂಗಮದ ತವಕ ಕೇವಲ*
*ಗಂಗೆಯು ಮಾತ್ರವಲ್ಲ*
*ಸಾಗರನೂ ತೋರುವನು.*

**ಶಂತನ್.ಕೆ.ಬಿ**





# ಹಕ್ಕಿಲೋಕ

## * ನಾವು ಕೊಂದ ಹಕ್ಕಿ.

**ವೈಜ್ಞಾನಿಕ ಹೆಸರು:** ***Bubulcus ibis***

**ಇಂಗ್ಲೀಷ್ ಹೆಸರು:** **Cattle Egret**

ನಮ್ಮದು ಅಂತಹ ದೊಡ್ಡ ಊರೇನಲ್ಲ. ಐದತ್ತು ಮನೆಗಳ ಸಣ್ಣ ಹಳ್ಳಿ .  ಹಳ್ಳಿ ಚಿಕ್ಕದಾದರೇನು ನಮ್ಮೂರಲ್ಲಿ ಹುಡುಗರ ಬೆಟಾಲಿಯನ್ನೇ ಇದೆ. ಈ ತೀಟೆ ಹುಡುಗರು ಇಡೀ ಶಾಲೆಗೆ ಫೇಮಸ್ಸು. ಇವರು ಮಾಡದ ತೀಟೆಗಳಿಲ್ಲ, ಇವರು ಆಡದ ಆಟಗಳಿಲ್ಲ. ಆದರೆ ಓದಿನಲ್ಲಿ ಮಾತ್ರ ಸ್ವಲ್ಪ ಹಿಂದೇನೇ. ಎಲ್ಲಾವುದರಲ್ಲೂ ನಾವೇ ಮುಂದಾದರೆ ಬೇರೆಯವರಿಗೆ ಅವಕಾಶ ಬೇಡವೇ? ಎಂಬುದು ಇವರ ವಾದ!.

ಈ ತೀಟೆ ಬಾಲರು ಮಾಡುವ ಕಿತಾಪತಿಗಳು ಶಾಲೆಯಾ ಎಲ್ಲ  ಶಿಕ್ಷಕರಿಗೂ ಗೊತ್ತು.ಈ ತೀಟೆ ಬೇಟಾಲಿಯನ್‌ನಲ್ಲಿದ್ದ ‘ಬಡ್ಡಪ್ಪ’ನ ಮಗ ಶಿವಮಾದನು, ಮೇಷ್ಟ್ರುಗಳಿಗಿಂತ ಒಂದು ಇಂಚು ಮಾತ್ರ ಉದ್ದವಿದ್ದ. ಉಳಿದವರಲ್ಲಿ ಹೆಸರಿನಂತೆ ಕಪ್ಪಗೆ ಕುಳ್ಳಗಿದ್ದ ‘ಕರಿಯ’. ಈಗಲೂ ಎಲ್ಲರಿಗಿಂತ ಕುಳ್ಳಗಿರುವ ಕೆಂಚನೆಯ ‘ಕುಳ್ಳಯ್ಯ’, ಮೌನವಾಗಿಯೇ ತೀಟೆಮಾಡುತ್ತಿದ್ದ ಸ್ವಲ್ಪ ದಪ್ಪಗಿರುವ ‘ಗೊಯ್ಯ’ ಎಂದು ಕರೆಸಿಕೊಳ್ಳುವ ‘ಮಾದೇಶ’, ಹಾಗೂ ಹೆದರುಪುಕ್ಕಲನಾದರೂ  ತಾನು ಮಾಡದ ತೀಟೆಗಳಿಗೆ ಮೇಷ್ಟ್ರುಗಳಿಂದ ಏಟು ತಿಂದೂ–ತಿಂದೂ ಇವರ ಸಹವಾಸ ಬೇಡವೆಂದರೂ ಸಹ ಬಿಡಲಾಗದೆ ಇವರನ್ನೇ ಹಿಂಬಾಲಿಸುವ ‘ನಂಜ’. ಆಟಗಳಲ್ಲಿ ಇವರನ್ನು ಮೀರಿಸುವವರು ಶಾಲೆಯಲ್ಲೇ ಯಾರು ಇರಲಿಲ್ಲ, ಅದರಲ್ಲೂ ಕಬಡ್ಡಿ, ವಾಲಿಬಾಲ್‌ಗಳಲ್ಲಿ ಇವರದ್ದು ಎತ್ತಿದ ಕೈ ಓಡುವುದರಲ್ಲಿ ಇವರು ಜಿಂಕೆ ಮರಿಗಳೆ!. ಆದರೆ ಹಾಗಾಗ ತೀಟೆ ಮಾಡಿ ಕೆಟ್ಟ ಹೆಸರು ಗಳಿಸಿದ್ದರು ಅಷ್ಟೆ.

ಪ್ರತಿ ಮಂಗಳವಾರ ಶಾಲೆಯಲ್ಲಿ ಮಧ್ಯಾನ್ಹ ರಾಗಿ ಮುದ್ದೆಯೂಟವನ್ನು ಉಳಿದ ದಿನ ಅನ್ನದೂಟವನ್ನು ಉಚಿತವಾಗಿ ನೀಡುವುದು ವಾಡಿಕೆ. ಶಾಲೆಯ ಎಲ್ಲಾ ಮಕ್ಕಳೂ ತಪ್ಪದೇ ಎಲ್ಲಾ ದಿನವೂ ಶಾಲೆಯಲ್ಲೇ ಊಟಮಾಡುತ್ತಿದ್ದರು.ನಮ್ಮ ಬೆಟಾಲಿಯನ್‌ನವರು ಅನ್ನದೂಟದ ದಿನ ಶಾಲೆಯ ಎಲ್ಲಾ ಮಕ್ಕಳಂತೆ ತಪ್ಪದೇ ಶಾಲೆಯಲ್ಲೇ ಊಟಮಾಡುವರು, ಆದರೆ ಮುದ್ದೆ ಊಟವಿರುವ ದಿನದಂದು ಮಾತ್ರ ಯಾರಿಗೂ ಕಾಣದಂತೆ ಎಲ್ಲೋ ಮಾಯವಾಗಿಬಿಡುತ್ತಿದ್ದರು. ಇವರ ಈ ಚಾಣಕ್ಷ ಯೋಜನೆಯು ಬೆಳಕಿಗೆ ಬಂದದ್ದು ಇವರು ಮಾಡಿದ ಒಂದು ಕಿತಾಪತಿಯಿಂದ.

ಅಂದು ಮುದ್ದೆಊಟ ಎಂದು ತಿಳಿದಿದ್ದ ನಮ್ಮ ಹುಡುಗರು ಅವರ ಆಟದ ಮಾಮೂಲಿ ಜಾಗಗಳಲ್ಲಿ ಒಂದಾದ ಶಾಲೆಯ ಪಕ್ಕದಲ್ಲಿರುವ ಕೆರೆಗೆ ಹೊರಟರು. “ಇವತ್ತು ಈಜು ಹೊಡ್ಯೋಣ್ವೇ?” ಎಂದು ಗುಂಪಿನಲ್ಲಿದ್ದನ್ಯಾರೋ  ಒಬ್ಬ ಪ್ರಶ್ನಿಸಿದ.
ಅದಕ್ಕೆ ನಂಜನು *“ಬ್ಯಾಡಕಣ್ರೋ ಮೊನ್ನೆ ಯಾರೋ ಹುಡ್ಗ ಹಿಂಗೆ ಈಜು ವಡ್ಯಾಕೆ ಹೋಗಿ ಬಿದ್ದು ಸತ್ತೊದ್ನಂತೆ”* ಎಂದ
ಆಗ ಶಿವಮಾದನು ‘ಲೇ ಅಲ್ನೋಡ್ರೋ!’ ಎಂದದ್ದು ಎಲ್ಲರಿಗೂ ಕೇಳಿಸಿದರೂ ಅಲ್ಲಿ ಅವರಿಗೆ ಏನು ಕಾಣಲಿಲ್ಲ!. ಆಗ ಮತ್ತೆ ಅವನೇ ಮಾತನ್ನು ಮುಂದುವರಿಸುತ್ತ ‘ಏ ತೂ ನಿಮ್ಮ ಕಣ್ಣಿಗೆ! ಅಲ್ಲಿ ಕೊಕ್ಕರೆ ಕಾಣ್ತಿಲ್ಲೇನ್ರೊ?’ ಎಂದ.
ಆಗ ಅಲ್ಲಿ ಎಲ್ಲರಿಗೂ ಬಿಳಿ ಹಕ್ಕಿ ಯ ದರ್ಶನವಾಗಿ ‘ಊ ಕಾಣ್ತದೆ, ಅದ್ಕೇನೀಗ?’ ಎಂದರು.





‘ಇವತ್ತು ನಮ್ಮಾಟ ಏನಪ್ಪ ಅಂದ್ರೆ ಆ ಕೊಕ್ಕರೇಗೆ ಸರಿಯಾಗಿ ಯಾರ್ ಕಲ್ಲು ಹೊಡಿತಾರೋ ನೊಡೋದು’ ಎಂದ.

ಅದಕ್ಕೆ ಮಾದೇಶನು ‘ಹ ಹ ಹ ...... ಇವನು ಹೇಳ್ಬಿಟ್ಟ ಕೇಳ್ರಪ್ಪ ಆ ಹಕ್ಕಿ ಒಬ್ಬ ಕಲ್ಲು ಹೊಡೆದ ಮೇಲೆ ಇನ್ನೊಬ್ಬ ಹೊಡೀಲಿ ಅಂತ ಅಲ್ಲೇ ಕಾಯ್ಕೊಂಡು ಕೂತಿರ್ತದೆ’ ಎಂದು ನಕ್ಕ. ಅದಕ್ಕೆ ಕರಿಯನು ಪಲಾನ್ ಮಾಡಿ ‘ಸರಿ ಎಲ್ಲರೂ ಆ ಪೊದೆಯ ಮರೇಲಿ ಕುತ್ಕೋಳ್ಳೊಣ, ಎಲ್ರೂ ಒಟ್ಟಿಗೆ ಕಲ್ಲು ಒಡೆಯೋಣ’ ಎಂದ.

ಕರಿಯನ ಪಲಾನ್‌ಗೆ ಎಲ್ಲರೂ ತಲೆಯಲ್ಲಾಡಿಸಿ ಒಪ್ಪಿಗೆ ನೀಡಿದರು. ಎಲ್ಲರೂ ಒಂದೊಂದು ಕಲ್ಲು ಹಿಡಿದುಕೊಂಡು ಆ ಪೊದೆಯ ಕಡೆಗೆ ಮೆಲ್ಲನೆ ಹೆಜ್ಜೆಯಾಕಿದರು. ಅಲ್ಲಿ ಕುಳಿತಾಗ ಕುಳ್ಳಯ್ಯನು ‘ನಾನು ಒನ್ ಟೂ ತ್ರಿ ಏಣ್ಸ್ತೀನಿ ಕಣ್ರೋ. ನಾನು ತ್ರೀ ಎಂದಾಗ ಎಲ್ಲರೂ ಒಟ್ಟಿಗೆ ಒಡೆಯೋಣ’ ಎಂದು

ರೆಡಿ. . .

ಒನ್. . . .

ಟೂ_. .. .

ತ್ರೀ. . . . . ಎಂದುದ್ದೇ ತಡ ಎಲ್ಲರೂ ಒಟ್ಟಿಗೆ ಅಲ್ಲೇ ಮೀನು ಹಿಡಿಯಲು ವಂಚುಹಾಕಿ ಕೆರೆಯ ದಡದಲ್ಲಿ ಅರ್ಧಕಾಲನ್ನು ನೀರಿನಲ್ಲಿ ಮುಳುಗುವಂತೆ ನಿಂತಿದ್ದ ಕೊಕ್ಕರೆಯ ಕಡೆ ಕಲ್ಲುಗಳು ಸುಯ್ಯನೆ ಬಾಣದಂತೆ ಬಿದ್ದವು. ಹಕ್ಕಿ ಹಾರದಿದ್ದುದನ್ನು ಕಂಡ ಇವರು, ಹಕ್ಕಿಗೆ ನಾವು ಹೊಡೆದ ಕಲ್ಲು ಬಿದ್ದಿದೆಯೇ? ಎಂದು ತಿಳಿಯಲು ಅದರ ಬಳಿಗೆ ಓಡಿದರು. ಅಲ್ಲಿ ಹೋಗಿ ನೋಡಿದರೆ ಈ ಐದು ಜನರು ಹೊಡೆದ ಕಲ್ಲುಗಳಲ್ಲಿ ಯಾರದೋ ಒಂದು ಕಲ್ಲು ಅದರ ತಲೆಗೆ ಹೊಡೆದು ಅದು ಹಾರಲಾರದೆ ಅರ್ಧಜೀವವಾಗಿ ವಿಲವಿಲ ಒದ್ದಾಡುತ್ತಾ ಬಿದ್ದಿತ್ತು!.

ಆಟದಲ್ಲಿ ಮಗ್ನವಾಗಿದ್ದು ಬೇಟೆಯಾಡಿದ್ದು ವಿನೋದಕ್ಕಾಗಿ, ಆದರೆ ಈಗ ಕೊಕ್ಕರೆ ಸಾಯುವ ಸ್ಥಿತಿ ತಲುಪಿದ್ದರಿಂದ ವಿನೋದವು ಮಾಯವಾಗಿ ಸಾವು ಎಂಬ ಭಯ ಆ ಬಾಲರನ್ನು ಸಂಕಷ್ಟಕ್ಕೆ ಸಿಕ್ಕಿಸಿತ್ತು.

“ತೂ ನಿಮ್ಮ ಅದು ಸಾಯ್ವಂಗೆ ಹೊಡ್ದ್‌ಬಿಟ್ರಲ್ಲೋ ಅದು ಸತ್ತೋದ್ರೆ?.’ ಎಂದು ನಂಜನು ಹೇಳಿದನು.

ಅದಕ್ಕೆ ಮಾದೇಶನು ‘ನೀನು ಇದಕ್ಕೆ ಹೊಡ್ದೆತಾನೆ? ಈಗ ಏನೂ ಗೊತ್ತಿಲ್ಲದವನಂತೆ ನಾಟ್ಕ ಆಡ್ತಾಯಾ?.’ ಎಂದು ಬೈದನು. ಎಲ್ಲರೂ ಆ ಹಕ್ಕಿಗೆ ಒಡೆದಿದ್ದರೂ ಸಹ ಅವರಿಗೆ ಅದು ಅರ್ಧಜೀವವಾಗಿ ನರಳುತ್ತಿದುದನ್ನು ಕಂಡು ಅದರ ಮೇಲೆ ಸ್ವಲ್ಪ ಕನಿಕರಬಂತು. ಎಲ್ಲರೂ ಆ ಹಕ್ಕಿಯನ್ನೇ ನೋಡುತ್ತಿರಬೇಕಾದರೆ ತಟ್ಟನೆ ಏನೋ ಹೋಳೆದವನಂತೆ ಶಿವಮಾದನು ಹಕ್ಕಿಯನ್ನು ತನ್ನ ಎರಡೂ ಕೈಗಳಿಂದ ಎತ್ತುಕೊಂಡು ಬಂದು ದಡದಲ್ಲಿ ಕುಳಿತು ಅದರ ತಲೆ ಸವರುತ್ತಿರಬೇಕಾದರೆ ಅದು ಕೊನೆಯುಸಿರೆಳೆಯಿತು.

ನಂಜನು ‘ಲೋ ಪಾಪ ಸತ್ತೊಯ್ತಲ್ರೋ ಏನ್ ಮಾಡೋದು, ಪಾಪ ಬತ್ತದೆ ಇರ್‍ರಿ ನಮ್ಗೆ’ ಎಂದು ಹೇಳಿದ ಇದಕ್ಕೆ ಕುಳ್ಳಯ್ಯನ್ನು ‘ಏನ್ ಮಾಡೋದು ಇವಾಗ ಸ್ಕೂಲ್‌ಗೆ ಟೈಮ್ ಆಯ್ತು ಅನ್‌ಸ್ತದೆ ನಡೀರಿ ಇದನ್ನ ಇಲ್ಲೇ ಬಿಸಾಕಿ ಬಿರ್ನ ಹೋಗಿ ಸ್ಕೂಲ್ ಸೇರ್ಕೊಳ್ಳೊಣ ಇಲ್ಲಾ ಅಂದ್ರೆ ಮೇಷ್ಟ್ರು ಸರ್‌ಯಾಗಿ ಬಿಡ್ತರೆ ಅಷ್ಟೆ!’ ಎಂದವನು ಶಾಲೆಯ ಕಡೆ ಹೊರಟ. ಎಲ್ಲಾ ಹುಡುಗರು ಮೇಷ್ಟ್ರುಗಳ ಏಟಿನ ರುಚಿಕಂಡಿದ್ದರಿಂದ ಇನ್ನು ಲೇಟಾದರೆ ಗ್ಯಾರಂಟಿ ಹೊಡಿತಾರೆ ಎಂದು ಹೆದರಿ ಕುಳ್ಳಯ್ಯನ ಮಾತಿನಂತೆ ಹೊರಡಲು ಸಿದ್ಧವಾದರು. ಆದರೆ ಶಿವಮಾದನು ಮಾತ್ರ ಕುಳಿತಲ್ಲಿಂದ ಕದಲಲಿಲ್ಲ .



ಕರಿಯ : ‘ಎ ಬಾರೋ ಟೈಮಾಯ್ತು ಹೋಗಣ’.

ಶಿವಮಾದ : ‘ಮಾಡೋದೆಲ್ಲಾ ಮಾಡ್ಬಿಟ್ಟು ಪಾಪ ಇದನ್ನ ಇಲ್ಲೇ ಬಿಸಾಕಿ ಹೋಯ್ತಿರೇನ್ರೊ, ಪಾಪ ಗುಂಡಿ ತೋಡಿ ಮಣ್ಣಾದ್ರೂ ಮಾಡೋಣ ಬನ್ರೋ’.

ನಂಜ : ‘ಲೇ ಮಣ್ಣುಗಿಣ್ಣು ಮಾಡೊ ಹೊತ್ಗೆ ಟೈಮಾಗೊಯ್ತುದೆ ಕಾಣೋ ಇಲ್ಲೆ ಮಡ್ಗಿ ಸ್ಕೂಲ್ ಬಿಟ್ಮೇಲೆ ಬಂದು ಮಣ್ಣುಮಾಡೋಣ ಬಾರೋ’ ಎಂದು ಹೆದುರುತ್ತಾ ಹೇಳಿದ .

ಶಿವಮಾದ : ‘ಅಸ್ಟ್ರಲ್ಲಿ ಯಾವ್ದಾದ್ರು ಹದ್ದು ಬಂದು ಎತ್ಕೊಹೊಗ್ಬಿಡ್ಲಿ,ಹೋಗ್ರೋಲೇ, ನಾನೇ ಇದನ್ನ ಮಣ್ಣು ಮಾಡಿ ಬರ್ತೀನಿ’ ಎಂದವನೆ ಯಾರಿಗೂ ಕಾಯದೆ ಕೊಕ್ಕರೆಯನ್ನು ಎತ್ತಿಕೊಂಡು ಪಕ್ಕದಲ್ಲಿದ್ದ ಗದ್ದೆಬಯಲಿನಲ್ಲಿ ಗುಂಡಿ ತೋಡಲು ಹೊರಟ.

ಇವನನ್ನು ಬಿಟ್ಟು ಹೋಗಲು ಮನಸ್ಸು ಬಾರದ ಎಲ್ಲರೂ ಇವನನ್ನೇ ಇಂಬಾಲಿಸಿ ಗುಂಡಿ ತೋಡ ತೊಡಗಿದರು. ಅಲ್ಲೆ ಗದ್ದೆಯಲ್ಲಿ ಹಸುಗಳ ಬಳಿ ಹಿಂಡು ಹಿಂಡು ಕೊಕ್ಕರೆಗಳು ಇದ್ದವು. ಸಾಮಾನ್ಯವಾಗಿ ಗದ್ದೆಬಯಲಿನಲ್ಲಿ, ಕೆರೆಗಳ ಬಳಿ ಕಾಣುವ ಎಲ್ಲಾ ಬಿಳಿ ಬಣ್ಣದ ಪಕ್ಷಿಗಳನ್ನು ಕೊಕ್ಕರೆಗಳೆಂದೇ ಕರೆಯುತ್ತೇವೆ. ಆದರೆ ಕೊಕ್ಕರೆಗಳಲ್ಲಿ ಹಲವಾರು ವಿಧಗಳಿವೆ ಇವುಗಳಲ್ಲಿ ಈ ಹುಡುಗರು ಹೊಡೆದದ್ದು ಕೃಷಿಮಾಡುವ ಜಾಗಗಳಲ್ಲಿ, ಕೆರೆಗಳ ಬಳಿ ಹಾಗೂ ಹುಳು ಹುಪ್ಪಟೆಗಳನ್ನು ಅರಸುತ್ತಾ ಎಮ್ಮೆ-ಹಸುಗಳ ಬಳಿ ಕಾಣಸಿಗುವ ಗೋವಕ್ಕಿ ಎಂಬ ಕೊಕ್ಕರೆ. ಇದು ಕೋಳಿಗಿಂತ ಎತ್ತರವಾದ ಬಿಳಿ ಬಣ್ಣದ ಪಕ್ಷಿ, ಬಲಿಷ್ಠ ಹಳದಿ ಬಣ್ಣದ ಕೊಕ್ಕು,ಉದ್ದವಾದ ಕಪ್ಪು ಬಣ್ಣದ ಕಾಲು ಇದರ ಲಕ್ಷಣಗಳು.ಗಂಡು ಪಕ್ಷಿಗಳಿಗೆ ಸಂತಾನೋತ್ಪತ್ತಿ ಕಾಲದಲ್ಲಿ ತಲೆ, ಕತ್ತು ಹಾಗೂ ಬೆನ್ನಿನ ಮೇಲಿರುವ ಪುಕ್ಕಗಳು ಹಳದಿಯಾಗುತ್ತವೆ. ಇವುಗಳು ನವೆಂಬರ್‌ನಿಂದ ಮಾರ್ಚ್‌ಗಳ ನಡುವೆ ಮರದ ಮೇಲೆ ಬಟ್ಟಲಿನಾಕಾರದ ಕಡ್ಡಿಗಳಿಂದ ಗೂಡು ಮಾಡಿ ಐದರಿಂದ ಒಂಬತ್ತು ಮೊಟ್ಟೆಗಳನ್ನಿಟ್ಟು ಇಪ್ಪತ್ನಾಲ್ಕುಗಳ ದಿನಗಳ ತನಕ ಮರಿಮಾಡಿಸುತ್ತವೆ. ಗದ್ದೆಯಲ್ಲಿ ತೋಡಿದ ಗುಂಡಿಯಲ್ಲಿ ಸತ್ತ ಗೋವಕ್ಕಿ ಯನ್ನು ಮುಚ್ಚಿ ಅಲ್ಲೇ ಪಕ್ಕದಲ್ಲಿದ್ದ ಬೇಲಿಹೂಗಳನ್ನು ಆ ಗುಂಡಿಯ ಮೇಲೆ ಹಾಕಿ ಬರುವಷ್ಟರಲ್ಲಿ ಶಾಲೆ ಕ್ಲಾಸು ಎಲ್ಲಾ ಮುಗಿದು, ಕೊನೆ ಬೆಲ್ ಹೊಡೆದು ಮಕ್ಕಳನ್ನು ಆಟಕ್ಕೆ ಬಿಟ್ಟಿದ್ದರು.ಆಗ ಬಂದ ಈ ಬಳಗವು ಮೇಷ್ಟ್ರ ಕೈಲಿ ಚೆನ್ನಾಗಿ ಒದೆ ತಿಂದು ಮತ್ತೆ ಆಟಕ್ಕೆ ಸೇರಿಕೊಂಡವು.



# ಪರಿಸರ ದಿನ



*ಹುಡುಕ ಹೊರಟೆವು ನಾವಿಂದು*
*ಹುಡುಕ ಹೊರಟೆವು ನಾವಿಂದು*

*ನಮ್ಮಿಂದ ಬಲುದೂರದ ಉದ್ಯಾನವನದಿ*
*ಕಾಣಸಿಗದ ಅಪರೂಪದ ಪ್ರಾಣಿಪಕ್ಷಿಯ*
*ಸುಂದರ ಮನೋಹರ ಜಲಧಾರೆಯ*
*ಈ ನಗರೀಕರಣದ ಕಾನನದೊಳಗೆ*

*ಎಲ್ಲಿ ತಾನೇ ಇರುವುದು ಆ ನಿನ್ನ ಬಯಕೆಯ*
*ಉದ್ಯಾನವನ, ಆ ಸುಂದರ ಗಿರಿಶೃಂಗ.*
*ಎಲ್ಲವನು ಸಂಹರಿಸಿ ಹುಡುಕತಿರುವೇಕೆ?*
*ಜ್ಞಾನೋದಯದ ಬೆಳಕು ಇಂದು ಚೆಲ್ಲಿತೆ ನಿನಗೆ*

*ಕೇವಲ ಒಂದೇ ಶತವರ್ಷದಲಿ ಜಗವಾಳೋ ದೊರೆಯಾದೆ*
*ಜಾಗತೀಕರಣ ತಂತ್ರಜ್ಞಾನವೇ ನನಗೆ ಸಾಕೆಂದೇ*
*ಇಂದೇಕೆ? ಪರಿಸರ ಸಂರಕ್ಷಣೆಯ ಕೂಗು*
*ಆರ್ಥಿಕತೆಯ ಒಲವಿನೊಳು ಸಂರಕ್ಷಣೆ ಎಷ್ಟು?*

*ಕ್ಷೀಣಿಸುತ್ತಿರುವ ಜೀವಪ್ರಭೇದಗಳು ಸಹಸ್ರ-ಸಹಸ್ರ*
*ಇನ್ನಾದರೂ ತಟಸ್ಥನಾಗು ನಿನ್ನ ಪ್ರಾಭಲ್ಯಕೆ*
*ಅಂಕುಶವಿಡು,ಹೊಸ ಚಿಗುರು ಹಸಿರ ಹಾಸು*
*ಈ ಧರೆಯ ನಿರ್ಮಲತೆಯ ಸಹಜವಾಗಿಸು*

*ಇನ್ನಾದರೂ ವನಪಾಲನೆಯ ಮಾಡೋಣ*
*ಪ್ರಕೃತಿಯ ಮುನಿಸ ಸ್ವಲ್ಪವಾದರೂ ಸಡಲಿಸೋಣ.*

– **ಕೃಷ್ಣನಾಯಕ್**
ವನ್ಯಜೀವಿಗಳ ಬಗ್ಗೆ ಪ್ರೀತಿಯಿರುವ ಇವರು
ಮದೇಶ್ವರ ರಕ್ಷಿತ ಅರಣ್ಯದ ಬಳಿ ಕೃಷಿ ಜೊತೆಗೆ
ಸಾಹಿತ್ಯ ಕೃಷಿಯಲ್ಲಿ ತೊಡಗಿರುವ
ವಿಜ್ಞಾನ ಪದವೀಧರರು. **-9611428901**